## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಸುನೀಲಗೌಡ ಬಸನಗೌಡ ಪಾಟೀಲ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1238** |
| ಉತ್ತರಿಸಬೇಕಾದ ದಿನಾಂಕ | : | 22.09.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಸರ್ಕಾರದ ವಿವಿಧ ವಸತಿ ಯೋಜನೆಗಳಲ್ಲಿ ಫಲಾನುಭವಿಗಳು ಮನೆಗಳನ್ನು ನಿರ್ಮಾಣ ಮಾಡಿಕೊಂಡಿದ್ದಾರೆಯೇ, ಸದರಿ ಫಲಾನುಭವಿಗಳಿಗೆ ಸಮಯಕ್ಕೆ ಸರಿಯಾಗಿ ಸಹಾಯಧನ ಸಂದಾಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಸಹಾಯಧನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು ; | ವಿವಿಧ ವಸತಿ ಯೋಜನೆಗಳಡಿ ಸ್ವತಃ ಫಲಾನುಭವಿಗಳೇ ಮನೆಗಳನ್ನು ನಿರ್ಮಾಣ ಮಾಡುತ್ತಿದ್ದು, ಮನೆ ನಿರ್ಮಾಣದ ನಾಲ್ಕು ಹಂತಗಳ ಪ್ರಗತಿಗೆ ಅನುಗುಣವಾಗಿ ಅನುದಾನವನ್ನು ಬಿಡುಗಡೆಗೊಳಿಸಲಾಗುತ್ತಿದೆ. ಪ್ರಸ್ತುತ ಸರ್ಕಾರ ಜಾರಿಗೆ ಬಂದಮೇಲೆ 2.44 ಲಕ್ಷ ಮನೆಗಳನ್ನು ಪೂರ್ಣಗೊಳಿಸಲಾಗಿದೆ.<br><br>ವಿವಿಧ ವಸತಿ ಯೋಜನೆಗಳಡಿ ಮಂಜೂರಾದ ಮನೆಗಳಿಗೆ ಇಂದಿರಾ ಮನೆ ಆ್ಯಪ್ ನ ಮುಖಾಂತರ ಜಿ.ಪಿ.ಎಸ್ ಮಾಡಲಾದ ಮನೆಗಳ ಭೌತಿಕ ಪ್ರಗತಿಗನುಗುಣವಾಗಿ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು, ಆದರೆ, ಪ್ರಗತಿಯಲ್ಲಿರುವ ಮನೆಗಳಲ್ಲಿ ಕೆಲವು ಅನರ್ಹ ಫಲಾನುಭವಿಗಳ ಆಯ್ಕೆ ಕಂಡು ಬಂದಿರುವುದರಿಂದ ಅನುದಾನ ದುರ್ಬಳಕೆಯನ್ನು ತಡೆ ಹಿಡಿಯುವ ಉದ್ದೇಶದಿಂದ ಸರ್ಕಾರದ ಆದೇಶ ಸಂಖ್ಯೆ:ವಇ 154 ಹೆಚ್‌ಎಎಂ 2019, ದಿನಾಂಕ:16.11.2019 ರ ರೀತ್ಯಾ ಪ್ರಗತಿಯಲ್ಲಿರುವ ಮನೆಗಳನ್ನು ಇಂದಿರಾ ಮನೆ ಮೊಬೈಲ್ ಆಪ್ ಮೂಲಕ ಜಿ.ಪಿ.ಎಸ್ ಗೆ ಅಳವಡಿಸಿ, ಅರ್ಹಗೊಂಡ ನಂತರ ಸದರಿ ಮನೆಗಳ ಪ್ರಗತಿಯನ್ನು ಮತ್ತೊಮ್ಮೆ Geo ಆಧಾರಿತ ವಿಜಿಲ್ ಆಪ್ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಯವರು ಹಾಗೂ ನಗರ ಪ್ರದೇಶದಲ್ಲಿ ಜಿಲ್ಲಾಧಿಕಾರಿಯವರು ಪರಿಶೀಲಿಸಿ, ದೃಢೀಕರಿಸಿದ ನಂತರ ಸದರಿ ಫಲಾನುಭವಿಗಳ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮುಖಾಂತರ ಅನುದಾನ ಬಿಡುಗಡೆ ಮಾಡಲಾಗುತ್ತಿತ್ತು. ಪ್ರಸ್ತುತ ಸರ್ಕಾರ ಜಾರಿಗೆ ಬಂದ ಮೇಲೆ ರೂ.2289.54ಕೋಟಿ ಅನುದಾನವನ್ನು ಫಲಾನುಭವಿಗಳ ಖಾತೆಗೆ ಬಿಡುಗಡೆಗೊಳಿಸಲಾಗಿದೆ.<br><br>ಮುಂದುವರೆದಂತೆ ವಿವಿಧ ವಸತಿ ಯೋಜನೆಗಳಡಿ ಪ್ರಗತಿಯಲ್ಲಿರುವ ಮನೆಗಳ ಫಲಾನುಭವಿಗಳಿಗೆ ಅನುದಾನ ಬಿಡುಗಡೆ ಮಾಡುವಾಗ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಎಂಬ ಎರಡು ಪರಿಶೀಲನಾ ವಿಧಾನಗಳ ಮೂಲಕ ಅನುದಾನ ಬಿಡುಗಡೆ ಆಗುತ್ತಿದ್ದು, ಇದರಿಂದ ಆಗುವ ವಿಳಂಬವನ್ನು ತಪ್ಪಿಸಲು ಮೇಲ್ಕಂಡ ಇಂದಿರಾ ಆಪ್ ಮತ್ತು ವಿಜಿಲ್ ಆಪ್ ಅನ್ನು ಒಗ್ಗೂಡಿಸಿ, ಇಂದಿರಾ ವಿಜಿಲ್ ಆಪ್ ಎಂಬ ನೂತನ ತಂತ್ರಾಂಶವನ್ನು ಅಳವಡಿಸಲಾಗಿದ್ದು, ಫಲಾನುಭವಿಗಳಿಗೆ |

ಶೀಘ್ರವಾಗಿ ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗಿದೆ.

(ಆ) ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಕಳೆದ 5 ವರ್ಷಗಳಲ್ಲಿ ವಿವಿಧ ವಸತಿ ಯೋಜನೆಗಳಲ್ಲಿ ಎಷ್ಟು ಮನೆಗಳನ್ನು ಸರ್ಕಾರ ಮಂಜೂರು ಮಾಡಿದೆ; (ವರ್ಷಾವಾರು/ ಗ್ರಾಮ ಪಂಚಾಯಿತಿವಾರು/ ಯೋಜನೆವಾರು ಮಾಹಿತಿ ನೀಡುವುದು).

ವಿಜಯಪುರ ಹಾಗೂ ಬಾಗಲಕೋಟೆ ಜಿಲ್ಲೆಗೆ 2016-17 ನೇ ಸಾಲಿನಿಂದ 2020-21 ನೇ ಸಾಲಿನವರೆಗೆ ವಿವಿಧ ಗ್ರಾಮೀಣ ವಸತಿ ಯೋಜನೆಯಡಿಯಲ್ಲಿ 85147 ಮನೆಗಳನ್ನು ಮಂಜೂರು ಮಾಡಿ ಕಾಮಗಾರಿ ಆದೇಶ ನೀಡಲಾಗಿರುತ್ತದೆ. ಈ ಪೈಕಿ 48503 ಮನೆಗಳು ಪೂರ್ಣಗೊಂಡಿದ್ದು,22772 ಮನೆಗಳು ವಿವಿಧ ಹಂತದ ಪ್ರಗತಿಯಲ್ಲಿದ್ದು, 1378 ಮನೆಗಳು ಪ್ರಾರಂಭವಾಗಬೇಕಾಗಿದ್ದು, 12494 ಮನೆಗಳು ರದ್ದಾಗಿರುತ್ತದೆ.

| ಜಿಲ್ಲೆ | ಮಂಜೂರಾದ ಮನೆಗಳು | ಪೂರ್ಣಗೊಂಡ ಮನೆಗಳು | ಒಟ್ಟು ಪ್ರಗತಿಯಲ್ಲಿದ್ದ ಮನೆಗಳು | ಪ್ರಾರಂಭವಾಗಬೇಕಾದ ಮನೆಗಳು | ರದ್ದಾದ ಮನೆಗಳು |
|---|---|---|---|---|---|
| ವಿಜಯಪುರ | 52672 | 31618 | 14266 | 776 | 6012 |
| ಬಾಗಲಕೋಟೆ | 32475 | 16885 | 8506 | 602 | 6482 |
| **ಒಟ್ಟು** | 85147 | 48503 | 22772 | 1378 | 12494 |

(ಇ) ಕಳೆದ 5 ವರ್ಷಗಳಲ್ಲಿ ವಿಜಯಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ವಿವಿಧ ವಸತಿ ಯೋಜನೆಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಿಕೊಂಡಿರುವ ಫಲಾನುಭವಿಗಳ ಸಂಖ್ಯೆ ಎಷ್ಟು; (ಪಟ್ಟಿ ನೀಡುವುದು ಹಾಗೂ ಯೋಜನೆವಾರು ವರ್ಷವಾರು ಮತ್ತು ಗ್ರಾಮ ಪಂಚಾಯಿತಿವಾರು ಹಾಗೂ ಸಹಾಯಧನ ಸಂದಾಯವಾದ ಬಗ್ಗೆ ಮತ್ತು ಸಂದಾಯಕ್ಕೆ ಬಾಕಿ ಇರುವ ಬಗ್ಗೆ ಸಂಪೂರ್ಣ ಮಾಹಿತಿಯನ್ನು ನೀಡುವುದು)

ಯೋಜನಾವಾರು ಮತ್ತು ಗ್ರಾಮ ಪಂಚಾಯಿತಿವಾರು ವಿವರವನ್ನು ಅನುಬಂಧ-1 ರಲ್ಲಿ ಒದಗಿಸಲಾಗಿದೆ.

ವಿಜಯಪುರ ಹಾಗೂ ಬಾಗಲಕೋಟೆ ಜಿಲ್ಲೆಗೆ 2016-17 ನೇ ಸಾಲಿನಿಂದ 2020-21 ನೇ ಸಾಲಿನವರೆಗೆ ವಿವಿಧ ವಸತಿ ಯೋಜನೆಗಳಡಿ ಗ್ರಾಮೀಣ ಪ್ರದೇಶದಲ್ಲಿ ಜಿಪಿಎಸ್ ಆಧಾರಿತ ಭೌತಿಕ ಪ್ರಗತಿಗೆ ಅನುಗುಣವಾಗಿ ಬಿಡುಗಡೆಯಾದ ಅನುದಾನದ ವಿವರ ಕೆಳಕಂಡಂತಿದೆ. ಯೋಜನೆವಾರು ಮತ್ತು ಗ್ರಾಮ ಪಂಚಾಯಿತಿವಾರು ವಿವರವನ್ನು ಅನುಬಂಧ-2 ರಲ್ಲಿ ಒದಗಿಸಲಾಗಿದೆ.

| ಜಿಲ್ಲೆ | ಬಿಡುಗಡೆಯಾದ ಅನುದಾನದ ವಿವರ (ರೂ.ಲಕ್ಷಗಳಲ್ಲಿ) |
|---|---|
| ವಿಜಯಪುರ | 45957.37 |
| ಬಾಗಲಕೋಟೆ | 24846.54 |
| **ಒಟ್ಟು** | 70803.91 |

ಸಂಖ್ಯೆ:ವಇ 340 ಹೆಚ್‌ಎಂ 2021

(**ವಿ. ಸೋಮಣ್ಣ**)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು